# ಚಟುವಟಿಕೆ 1. ನಾವು ಎಷ್ಟು ನೀರನ್ನು ಬಳಸುತ್ತೇವೆ

## ಗುರಿ:

ಪ್ರತಿದಿನ ನೀವು ವಿವಿಧ ಕೆಲಸಗಳಿಗಾಗಿ ಎಷ್ಟು ನೀರನ್ನು ಬಳಸುತ್ತೀರಿ ಎಂದು ನಿಮಗೆ ತಿಳಿದಿದೆಯೇ? ಈ ಚಟುವಟಿಕೆಯಲ್ಲಿ ನೀವು ಮನೆಯಲ್ಲಿ ಒಂದು ದಿನದಲ್ಲಿ ವಿವಿಧ ಚಟುವಟಿಕೆಗಳಿಗೆ ನೀವು ಬಳಸುವ ನೀರಿನ ಗಾತ್ರವನ್ನು ದಾಖಲಿಸಬಹುದು ಮತ್ತು ಅಂದಾಜಿಸಬಹುದು .('ಅಂದಾಜಿಸುವುದು' ಅಂದರೆ ಅಳತೆ ಮಾಡಿ , ಲೆಕ್ಕ ಹಾಕಿ ಹಾಗು ಯೋಚಿಸಿ ಸರಿಯಾದ ಉತ್ತರಕ್ಕೆ ಸಾಕಷ್ಟು ಹತ್ತಿರವಾಗಿರುವ ಬೆಲೆಯನ್ನು ಕಂಡುಹಿಡಿಯುವುದು.)

## ನಿಮಗೆ ಏನು ಬೇಕು:

ಅಳತೆ ಬಟ್ಟಲು ಅಥವಾ ಸಿಲಿಂಡರ್ (ಗಾತ್ರವನ್ನು ಅಳೆಯಬಹುದಾದ ಯಾವುದೇ ಪಾತ್ರೆ)

ಮನೆಯಲ್ಲಿ ಸಾಮಾನ್ಯವಾಗಿ ಕುಡಿಯಲು ಬಳಸುವ ಲೋಟ/ಬಟ್ಟಲು ಅಥವಾ ಬಚ್ಚಲಮನೆಯಲ್ಲಿ ಬಳಸುವ ಚೊಂಬು/ಬಕೆಟ್

## ಏನು ಮಾಡಬೇಕು:

a ) ಗೃಹೋಪಯೋಗಿ ಪಾತ್ರೆಗಳನ್ನು ಬಳಸಿಕೊಂಡು ನೀರಿನ ಪರಿಮಾಣವನ್ನು (ಗಾತ್ರ) ಅಳೆಯುವದು

ನಿಮ್ಮ ನೀರಿನ ಬಳಕೆಯನ್ನು ಅಂದಾಜಿಸಲು, ಮೊದಲು ನೀವು ಮನೆಯಲ್ಲಿ ಸಾಮಾನ್ಯವಾಗಿ ಬಳಸುವ ಪಾತ್ರೆಗಳ ಗಾತ್ರವನ್ನು ತಿಳಿಯಬೇಕು. ಒಮ್ಮೆ ಅವುಗಳ ಗಾತ್ರವನ್ನು ತಿಳಿದ ಮೇಲೆ, ವಿವಿಧ ಕೆಲಸಗಳಿಗೆ ನೀವು ಎಷ್ಟು ನೀರನ್ನು ಬಳಸುವಿರಿ ಎಂದು ಅಳೆಯಲು ಈ ಪಾತ್ರೆಗಳನ್ನು ಬಳಸಬಹುದು.

ಅಳತೆ ಬಟ್ಟಲು ಅಥವಾ ಸಿಲಿಂಡರ್ ನ ಸಹಾಯದಿಂದ, ಈ ಕೆಳಗಿನ ಪಾತ್ರೆಗಳು ಪೂರ್ತಿ ತುಂಬಿದ್ದಾಗ ಎಷ್ಟು ನೀರನ್ನು ಹಿಡಿಯಬಹುದು ಎಂಬುದನ್ನು ಕಂಡುಹಿಡಿಯಿರಿ. (ಈ ಪಾತ್ರೆಗಳ ಗಾತ್ರವನ್ನು ಅಳೆಯಲು ಬಳಸುವ ನೀರು ಪೋಲಾಗದಂತೆ ಎಚ್ಚರ ವಹಿಸಿ!)

1. ನಾನು ಕುಡಿಯಲು ಬಳಸುವ ಒಂದು ಲೋಟ (ಅಥವಾ ಬಟ್ಟಲು) ....... ml ಹಿಡಿಯುತ್ತದೆ.
2. ನಾನು ಸ್ನಾನ ಮತ್ತು ಕೈ ತೊಳೆಯಲು ಬಳಸುವ ಒಂದು ಚೊಂಬು ......... ml ಹಿಡಿಯುತ್ತದೆ.
3. ನಾನು ಸ್ನಾನಕ್ಕೆ ಮತ್ತು ಕೈ ತೊಳೆಯಲು ಬಳಸುವ ಒಂದು ಬಕೆಟ್ ......... ml ನೀರಿನ ಚೊಂಬುಗಳನ್ನು ಹಿಡಿಯುತ್ತದೆ.
4. ಇದು .........ಲೀಟರ್ ಗೆ ಸಮವಿರುತ್ತದೆ.

(ಒಂದು ಪೂರ್ತಿ ಚೊಂಬಿನ ಗಾತ್ರವನ್ನು , ಬಕೆಟನ್ನು ತುಂಬಲು ಬಳಸುವ ಒಟ್ಟು ನೀರಿನ ಚೊಂಬುಗಳ ಸಂಖ್ಯೆಯಿಂದ ಗುಣಿಸಿ. ನೆನಪಿಡಿ, 1000 ಮಿ. ಲೀ. = 1 ಲೀಟರ್ )

b ) ನಿಮ್ಮ ಒಂದು ದಿನದ ನೀರಿನ ಬಳಕೆಯನ್ನು ಅಳೆಯುವುದು

ಒಂದು ದಿನದಲ್ಲಿ ನೀವು ನೀರನ್ನು ಯಾವ ಯಾವ ಕೆಲಸಗಳಿಗೆ ಬಳಸುತ್ತೀರಿ ಎಂದು ಯೋಚಿಸಿ. ಕೆಲವೊಂದನ್ನು ಇಲ್ಲಿ ಕೆಳಗೆ ಪಟ್ಟಿ ಮಾಡಲಾಗಿದೆ. ಈ ಪಟ್ಟಿಗೆ ಬೇರೆ ಕೆಲಸಗಳನ್ನೂ ಸೇರಿಸಬಹುದೇ ?

1. ಕುಡಿಯುವುದು
2. ಹಲ್ಲು ಉಜ್ಜುವುದು
3. ಕೈಗಳು, ಮುಖ ಇತ್ಯಾದಿಗಳನ್ನು ತೊಳೆಯುವುದು
4. ಸ್ನಾನ ಮಾಡುವುದು
5. ಶೌಚಾಲಯವನ್ನು ತೊಳೆಯುವುದು
6.
7.
8.

ನೀವು ಈಗಾಗಲೇ ಅಳತೆ ಮಾಡಿರುವ ಗಾತ್ರದ ಪಾತ್ರೆಯನ್ನು ಬಳಸಿಕೊಂಡು, ಪ್ರತಿಯೊಂದು ಕೆಲಸಕ್ಕೂ ಎಷ್ಟು ನೀರನ್ನು ಬಳಸುತ್ತೀರಿ ಎಂದು ಗಮನಿಸಿ. ಉದಾಹರಣೆಗೆ ನಿಮ್ಮ ಕೈ ತೊಳೆಯಲು ಚೊಂಬನ್ನು ಬಳಸಿ ಮತ್ತು ಎಷ್ಟು ಚೊಂಬು ನೀರನ್ನು ಬಳಸಿದಿರಿ ಎಂಬುದನ್ನು ಗುರುತು ಮಾಡಿಕೊಳ್ಳಿ. ಆ ಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ಬರೆಯಿರಿ. ದಿನದಲ್ಲಿ ನೀವು ಪ್ರತಿಬಾರಿ ನೀರನ್ನು ಬಳಸಿದಾಗ,ಈ ಕೋಷ್ಟಕವನ್ನು ತುಂಬಲು ಸೂಕ್ತವಾದ ಪಾತ್ರೆಯೊಂದನ್ನು ಬಳಸಿ.

ದಾಖಲೆ:

ಪ್ರತಿಸಲ ನೀವು ನೀರನ್ನು ಬಳಸಿದಾಗ ಈ ಕೆಳಗಿನ ಕೋಷ್ಟಕವನ್ನು ಭರ್ತಿ ಮಾಡಿ. ಅವಶ್ಯವಿದ್ದಲ್ಲಿ ನೀವು ಈ ಕೋಷ್ಟಕಕ್ಕೆ ಹೆಚ್ಚಿನ ಕೆಲಸಗಳನ್ನು ಸೇರಿಸಬಹುದು.

| **ಉದ್ದೇಶ** | **ಅಳೆಯಲು ಬಳಸಿದ ಪರಿಕರ** | **ಎಷ್ಟು ಪಾತ್ರೆ ನೀರನ್ನು ಬಳಸಿದಿರಿ**<br><br>**(ಇಲ್ಲಿ ನೀವು ಎಣಿಕೆ ಗುರುತುಗಳನ್ನು ಬಳಸಬಹುದು)** | **ಬಳಸಿದ ಒಟ್ಟು ಪರಿಮಾಣ**<br><br>**(ನೀವು ಬಳಸಿದ ತುಂಬಿದ ನೀರಿನ ಪಾತ್ರೆಗಳ ಸಂಖ್ಯೆಯನ್ನು ಪಾತ್ರೆಯ ಗಾತ್ರದಿಂದ ಗುಣಿಸಿ)** |
|---|---|---|---|
| **ನೀರು ಕುಡಿಯುವುದು** | ....... ಗಾತ್ರದ ಲೋಟ | | |
| **ತೊಳೆಯುವುದು ಮತ್ತು** | ...... ಗಾತ್ರದ ಚೊಂಬು | | |

| | | | |
|---|---|---|---|
| **ಶುಚಿಗೊಳಿಸುವುದು** | | | |
| **ಸ್ನಾನ ಮಾಡುವುದು** | …. ಗಾತ್ರದ ಚೊಂಬು | | |
| **ಶೌಚಾಲಯವನ್ನು ಶುಚಿ ಮಾಡುವುದು** | ….. ಗಾತ್ರದ ಬಕೆಟ್ | | |

(*ನೀವು ಫ್ಲಶ್ ಬಳಸಿದರೆ, ನೀವು ಫ್ಲಶ್ ಟ್ಯಾಂಕ್‌ನ ಗಾತ್ರವನ್ನು ಅಂದಾಜಿಸಬಹುದು ಅಥವಾ ಕಂಡುಹಿಡಿಯಬಹುದು. ನಿಮಗೆ ಅದು ತಿಳಿದಿಲ್ಲದಿದ್ದರೆ, ಫ್ಲಶ್ ಟ್ಯಾಂಕ್ 6 ಲೀಟರ್ ನೀರನ್ನು ಬಿಡುಗಡೆ ಮಾಡುತ್ತದೆ ಎಂದು ಊಹಿಸಬಹುದು.)

# ಯೋಚಿಸಿ

ಸಂಜೆಯ ನಂತರ, ನೀವು ಕೋಷ್ಟಕದಲ್ಲಿ ಭರ್ತಿ ಮಾಡಿದ ಮಾಹಿತಿಯನ್ನು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಲು ಬಳಸಿ. ನೆನಪಿಡಿ, ನೀವು ಉತ್ತರವನ್ನು ಕಂಡು ಹಿಡಿಯಲು ಅಳತೆ ಮಾಡಬೇಕು, ಅಂದಾಜಿಸಬೇಕು ಅಥವಾ ಲೆಕ್ಕ ಮಾಡಬೇಕು.

1. ನೀವು ಎಷ್ಟು ನೀರನ್ನು ಕುಡಿದಿರಿ?
2. ನೀವು ಸ್ನಾನ ಮಾಡಲು ಎಷ್ಟು ನೀರನ್ನು ಬಳಸಿದಿರಿ?
3. ನಿಮ್ಮನ್ನು ನೀವು ಸ್ವಚ್ಛಗೊಳಿಸಿಕೊಳ್ಳಲು (ಕೈ, ಹಲ್ಲು, ಇತ್ಯಾದಿ) ಎಷ್ಟು ನೀರನ್ನು ಬಳಸಿದಿರಿ?
4. ನೀವು ಶೌಚಾಲಯವನ್ನು ಶುಚಿಗೊಳಿಸಲು ಎಷ್ಟು ನೀರನ್ನು ಬಳಸಿದಿರಿ?
5. ಇವುಗಳಲ್ಲಿ ಯಾವ ಕೆಲಸಕ್ಕೆ ಅತಿ ಹೆಚ್ಚು ನೀರು ಬಳಕೆಯಾಯಿತು?
6. ಯಾವುದಕ್ಕೆ ಅತಿ ಕಡಿಮೆ ಬಳಕೆಯಾಯಿತು?
7. ನಿಮಗೆ ಯಾವುದಾದರು ಉತ್ತರದಿಂದ ಆಶ್ಚರ್ಯವಾಯಿತೇ?
8. ನೀರಿನ ಬಳಕೆಯನ್ನು ಅಳೆಯದ ದಿನಕ್ಕೆ ಹೋಲಿಸಿದಾಗ, ಅಳೆದ ದಿನದಂದು ನಿಮ್ಮ ನೀರಿನ ಬಳಕೆ ಸ್ವಲ್ಪ ಹೆಚ್ಚು ಅಥವಾ ಕಡಿಮೆಯಾಗಿದೆ ಎಂದು ನಿಮಗೆ ಅನ್ನಿಸುತ್ತದೆಯೇ?
9. ನಿಮ್ಮ ನೀರಿನ ಬಳಕೆಯನ್ನು ಕಡಿಮೆ ಮಾಡುವ ವಿಧಾನಗಳನ್ನು ಯೋಚಿಸಿ (ನಿಮ್ಮ ಮತ್ತು ನಿಮ್ಮ ಪರಿಸರವನ್ನು ಶುಚಿಯಾಗಿ ಮತ್ತು ಆರೋಗ್ಯವಾಗಿ ಇಟ್ಟುಕೊಂಡು!)
10. ದಿನದಲ್ಲಿ, ನೀರನ್ನು ಬಳಸುವ ಆದರೆ ಅದರ ಬಳಕೆಯನ್ನು ಅಳೆಯಲು ಸಾಧ್ಯವಾಗದಂತಹ ಕೆಲಸಗಳನ್ನು ಪಟ್ಟಿ ಮಾಡಿ. ಆ ರೀತಿಯ ಪ್ರತಿಯೊಂದು ಕೆಲಸಕ್ಕೂ, ನೀವು ಬಳಸಿದ ನೀರಿನ ಪರಿಮಾಣವನ್ನು ಅಂದಾಜಿಸಬಲ್ಲಿರಾ?
11. ನಿಮ್ಮ ಮನೆಯಲ್ಲಿ ಬೇರೆ ಯಾವ ಯಾವ ಕೆಲಸಗಳಿಗೆ ನೀರನ್ನು ಬಳಸುತ್ತಾರೆ? ಇಲ್ಲಿ ಕೆಲವು ಸಲಹೆಗಳಿವೆ. ನೀವು ಇನ್ನೂ ಕೆಲವು ಕೆಲಸಗಳನ್ನು ಯೋಚಿಸಬಹುದೇ?
    1. ಅಡುಗೆ ಮಾಡುವುದು
    2. ಪಾತ್ರೆ ತೊಳೆಯುವುದು

3. ಬಟ್ಟೆ ತೊಳೆಯುವುದು

# ಚರ್ಚಿಸಿ

1. ನೀವು ಯಾವ ಕೆಲಸಕ್ಕೆ ಅತಿ ಹೆಚ್ಚು ನೀರನ್ನು ಬಳಸಿದಿರಿ? ಯಾವ ಕೆಲಸಕ್ಕೆ ಅತಿ ಕಡಿಮೆ ನೀರನ್ನು ಬಳಸಿದಿರಿ? ಇದನ್ನು ನಿಮ್ಮ ತರಗತಿಯ ಕೆಲವರೊಂದಿಗೆ ಹೋಲಿಸಿ. ಯಾವ ರೀತಿಗಳಲ್ಲಿ ನಿಮ್ಮ ನೀರಿನ ಬಳಕೆ ಒಂದೇ ಆಗಿದೆ? ಇದು ಯಾವ ರೀತಿಗಳಲ್ಲಿ ಬೇರೆಯಾಗಿದೆ?
2. ನೀವು ದೈನಂದಿನ ನೀರಿನ ಬಳಕೆಯನ್ನು ನಿಮ್ಮ ತರಗತಿಯಲ್ಲಿ ಇರುವ ಎಲ್ಲರ ಬಳಕೆಯೊಂದಿಗೆ ಹೋಲಿಸಿ.
    - ಫಲಿತಾಂಶಗಳನ್ನು ತೋರಿಸಲು ನೀವು ಗ್ರಾಫ್ ಮಾಡಬಹುದು.
    - ನಿಮ್ಮ ತರಗತಿಯ ಒಬ್ಬ ವಿದ್ಯಾರ್ಥಿಯ ಸರಾಸರಿ ನೀರಿನ ಬಳಕೆಯನ್ನು ನೀವು ಲೆಕ್ಕ ಹಾಕಬಹುದು. ನೀವು ಸರಾಸರಿಗಿಂತ ಹೆಚ್ಚು ಅಥವಾ ಕಡಿಮೆ ಬಳಸಿದ್ದೀರಾ?
3. ನಿಮ್ಮ ದೈನಂದಿನ ಜೀವನದಲ್ಲಿ ನೀರನ್ನು ಸಂರಕ್ಷಿಸುವ ವಿಧಾನಗಳು ಯಾವುವು?